**READERS' THEATRE IN THE CLASSROOM**

ತರಗತಿಯಲ್ಲಿ ಓದುಗರ ರಂಗಮಂದಿರ

Early Literacy Initiative
Tata Institute of Social Sciences, Hyderabad

Practitioner Brief (13)
2019

Supported by

TATA TRUSTS

This Practitioner Brief is part of a series brought out by the Early Literacy Initiative anchored by the Azim Premji School of Education at the Tata Institute of Social Sciences, Hyderabad.

# ತರಗತಿಯಲ್ಲಿ ಒದುಗರ ರಂಗಮಂದಿರ

ಅಖಿಲಾ ಪೈಡಾ

**ಮುಖಪತ್ರ ಚಿತ್ರ (vignette)**



ಆರಂಭದಲ್ಲಿ, ಹತ್ತಿರದ ಕಾಲನಿಯೊಂದರ ಮಕ್ಕಳ ಒಂದು ಸಣ್ಣ ಗುಂಪು ನನ್ನ ವಾರಾಂತ್ಯದ ಗ್ರಂಥಾಲಯ ಚರ್ಚಾಕೂಟಗಳಿಗೆ ನಿಯತವಾಗಿ ಹಾಜರಾಗಲು ಪ್ರಾರಂಭಿಸಿತು. ಈ ಮಕ್ಕಳು 2ರಿಂದ 6ನೇ ತರಗತಿಯವರಾಗಿದ್ದು, ಇವರೆಲ್ಲಾ ಒಂದು ಸಣ್ಣ ಸ್ವಯಂ ಸೇವಾ ಸಂಸ್ಥೆಯು ನಡೆಸುತ್ತಿರುವ ಶಾಲೆಯಲ್ಲಿ ಕಲಿಯುತ್ತಿದ್ದರು.

ದುರದೃಷ್ಟವಶಾತ್, ಆ ಶಾಲೆಯಲ್ಲಿ ಅಕ್ಷರಾಭ್ಯಾಸವನ್ನುನ್ನು ಪರಿಣಾಮಕಾರಿಯಾಗಿ ಒದಗಿಸುತ್ತಿರಲಿಲ್ಲ: ಇತ್ತೀಚೆಗೆ ಶಾಲೆಗೆ ಸೇರಿದ ಇಬ್ಬರು ಹಿರಿಯ ಹುಡುಗಿಯರನ್ನು ಹೊರತುಪಡಿಸಿ, ಇತರೆ ಯಾವುದೇ ಮಕ್ಕಳು ಚೆನ್ನಾಗಿ ಒದುತ್ತಿರಲಿಲ್ಲ. ಅವರು (ಹಿಂದಿಯಲ್ಲಿ) ಒದುವುದಕ್ಕೆ ವಿವಿಧ ಹಂತದ ತೊಂದರೆ ಅನುಭವಿಸುತ್ತಿದ್ದು, ಅವರಲ್ಲಿನ ಬಹುತೇಕರು, ಅಕ್ಷರ-ಶಬ್ದಗಳನ್ನು ತಡೆದು ತಡೆದು (haltingly) ಒಟ್ಟುಗೂಡಿಸಿ ಪದಗಳನ್ನು ರೂಪಿಸುತ್ತಿದ್ದರು.

ನಾನು ಅವರೊಂದಿಗೆ ಇರುವ ಕಡಿಮೆ ಸಮಯದಲ್ಲಿ, ಅವರಿಗೆ ಒದುವುದನ್ನು ಕಲಿಸಲು

ಸಾಧ್ಯವಿಲ್ಲ ಎಂದು ನನಗೆ ತಿಳಿದಿತ್ತು, ಆದರೆ ಈ ಬಗ್ಗೆ ಏನಾದರೂ ಮಾಡಲೇಬೇಕೆಂದು ಭಾಸವಾಯಿತು. ಓದುವುದನ್ನು ಅಭ್ಯಾಸಮಾಡಲು ಮತ್ತು ನಿರರ್ಗಳತೆಯನ್ನು ಸುಧಾರಿಸಲು ನನ್ನ ವಿದ್ಯಾರ್ಥಿಗಳನ್ನು ಯಾವ ರೀತಿಯ ಆಕರ್ಷಕ ಮತ್ತು ಉದ್ದೇಶಪೂರ್ವಕ ಚಟುವಟಿಕೆಗಳೊಂದಿಗೆ ಪ್ರೋತ್ಸಾಹಿಸಬಹುದು? ಎನ್ನುವ ನಿಟ್ಟಿನಲ್ಲಿ ಆಲೋಚಿಸತೊಡಗಿದೆ.

ಓದುಗರ ರಂಗಮಂದಿರವನ್ನು ಪ್ರಯತ್ನಿಸಲು ನಾನು ನಿರ್ಧರಿಸಿದೆ – ಅಂದರೆ, ಸ್ಕ್ರಿಪ್ಟ್‌ನಲ್ಲಿನ ತಮ್ಮ ಸಾಲುಗಳನ್ನು ನಿರರ್ಗಳವಾಗಿ ಮತ್ತು ಅಭಿವ್ಯಕ್ತಿಯೊಂದಿಗೆ ಓದುವ ನಾಟಕ. ಹಾಗಾಗಿ, *ಗೀತ್ ಕಾ ಕಮಲ್*[1] ಆಧಾರದ ಮೇಲೆ ಸ್ಕ್ರಿಪ್ಟ್ ಬರೆದು, ಈ ವಿಚಾರವನ್ನು ಮಕ್ಕಳೊಂದಿಗೆ ಹಂಚಿಕೊಂಡೆ. ಅವರು ಸಹ ಈ ಕಲ್ಪನೆಯನ್ನು ಇಷ್ಟಪಟ್ಟರು!
ನಮ್ಮ ಗುರಿ ಪ್ರೇಕ್ಷಕರಿಗಾಗಿ ಪ್ರದರ್ಶನವನ್ನು ನೀಡುವುದಾಗಿತ್ತು (ಒಂದು ಸಣ್ಣ ಗುಂಪು ಇನ್ನೊಂದಕ್ಕೆ ಪ್ರದರ್ಶನ ನೀಡುತ್ತದೆ). ಇದು ಅವರಲ್ಲಿ ಅಪಾರ ಉತ್ಸಾಹವನ್ನು ಮೂಡಿಸಿತು. ಮಕ್ಕಳು ತಮಗೆ ನೀಡಿರುವ ಸಾಲುಗಳನ್ನು ಓದುವ ಅಭ್ಯಾಸದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡರು. ಅವರು ಮೂಲೆಗಳಲ್ಲಿ, ಒಂಟಿಯಾಗಿ ಅಥವಾ ಜೋಡಿಯಾಗಿ ಕುಳಿತು ಅಭ್ಯಾಸ ಮಾಡುತ್ತಿದ್ದರು. ಕಿರಿಯರು ಸ್ವತಂತ್ರವಾಗಿ ಓದಲು ಪ್ರಯತ್ನಿಸುವ ಮೊದಲು ನನ್ನೊಂದಿಗೆ ಅದನ್ನು ಪ್ರಯತ್ನಿಸಿದರು.

ಅವರು ಒಮ್ಮೆಯೂ ತಳಮಳ ಅಥವಾ ಬೇಸರವನ್ನು ವ್ಯಕ್ತಪಡಿಸದೆ, ಎರಡು ಅಥವಾ ಮೂರು ಚರ್ಚಾಕೂಟಗಳಲ್ಲಿ ಅಭ್ಯಾಸ ಮತ್ತು ಪೂರ್ವಾಭ್ಯಾಸ (rehearsal) ಮಾಡಿದರಲ್ಲದೆ, ಸಂಭಾಷಣೆಗಳು ಮತ್ತು ಪ್ರದರ್ಶನದ ಬಗ್ಗೆ ಹಲವಾರು ಸಲಹೆಗಳನ್ನು ಸಹ ನೀಡಿದರು. ಗುಂಪು ಸಿದ್ಧವಾಗಿದೆ ಎಂದು ಅವರಿಗನಿಸಿದಾಗ ನಾಟಕವನ್ನು ಪ್ರದರ್ಶಿಸಿದರು.

ನಾನು ಈ ಚಟುವಟಿಕೆಯನ್ನು ಯೋಜಿಸಿದಾಗ, ಅದು ಎಷ್ಟು ಜನಪ್ರಿಯ ಮತ್ತು ಪರಿಣಾಮಕಾರಿಯಾಗಬಹುದು ಎಂದು ನಾನು ಊಹಿಸಿರಲಿಲ್ಲ. ಮಕ್ಕಳು ಉತ್ಸಾಹವನ್ನು ಕಳೆದುಕೊಳ್ಳದೆ ನಿರರ್ಗಳತೆ ಮತ್ತು ಅಭಿವ್ಯಕ್ತಿಗಾಗಿ ಪಠ್ಯವನ್ನು ಮತ್ತೆ ಮತ್ತೆ ಓದಿದರಲ್ಲದೆ, ಸ್ಕ್ರಿಪ್ಟ್ ಆಧರಿಸಿದ ಪುಸ್ತಕ ಅಥವಾ ಕಥೆಯ ಸುತ್ತಲೂ ಸಂಭಾಷಣೆಗಳಲ್ಲಿ ತೊಡಗಿದ್ದರು. ಸಾಕಷ್ಟು ಸುಸಂಘಟಿತವಾಗಿ, ಸೂಕ್ತವಾದ ಧ್ವನಿ ಮತ್ತು ಅಭಿವ್ಯಕ್ತಿಗಳಿಗೆ ಸಂಬಂಧಿಸಿದ ಹಿಮ್ಮಾಹಿತಿಯು *(feedback)* ಪಾತ್ರಗಳ ಪ್ರೇರಣೆ, ವ್ಯಕ್ತಿತ್ವ ಮತ್ತು ಸಂದರ್ಭವನ್ನು ಕುರಿತ ಆಸಕ್ತಿದಾಯಕ ಚರ್ಚೆಗಳಿಗೆ ನಾಂದಿ ಹಾಡಿತು. ಸಹಜವಾಗಿ, ಯಾವುದೇ ಒಂದು ಚಟುವಟಿಕೆಯು ಎಲ್ಲಾ ಸಾಕ್ಷರತಾ ಸಮಸ್ಯೆಗಳನ್ನು ಪರಿಹರಿಸಲು ಸಾಧ್ಯವಿಲ್ಲ, ಆದರೆ ಓದುಗರ ರಂಗಭೂಮಿ ನನ್ನ ಭಾಷೆ ಮತ್ತು ಸಾಕ್ಷರತಾ ಟೂಲ್‌ಕಿಟ್‌ನ ಪ್ರಮುಖ ಭಾಗವಾಗಿ ಉಳಿಯುತ್ತದೆ.

ಸಹಾಯಕರು, ಮಕ್ಕಳಿಗಾಗಿ ಸಮುದಾಯ ಗ್ರಂಥಾಲಯ

ಓದುಗರ ರಂಗಭೂಮಿಯಲ್ಲಿ, ವಿದ್ಯಾರ್ಥಿಗಳು ಪೂರ್ವಾಭ್ಯಾಸದಲ್ಲಿ ತೊಡಗುತ್ತಾರಲ್ಲದೆ, ಪ್ರೇಕ್ಷಕರಿಗಾಗಿ ನಾಟಕವೊಂದನ್ನು ಪ್ರದರ್ಶಿಸುತ್ತಾರೆ. ಆದರೆ ಮುಖಪತ್ರ ಚಿತ್ರದಲ್ಲಿ ಹೇಳಿದಂತೆ, ಇವು ನಿಯತ ನಾಟಕಗಳಲ್ಲ: ವಿದ್ಯಾರ್ಥಿಗಳು ಸಾಲುಗಳನ್ನು *ಕಂಠಪಾಠ* ಮಾಡುವುದಿಲ್ಲ, ಅಥವಾ ರೂಢಿಗತ ಪ್ರಜ್ಞೆಯಿಂದಲೂ ಪ್ರದರ್ಶನವನ್ನು ನೀಡುವುದಿಲ್ಲ. ನಿಮಗೆ ರಂಗಪರಿಕರಗಳು, ದೃಶ್ಯಗಳು ಅಥವಾ ವೇಷಭೂಷಣಗಳ ಅಗತ್ಯವಿಲ್ಲ. ಬದಲಾಗಿ, ವಿದ್ಯಾರ್ಥಿಗಳು ಪುಸ್ತಕದಿಂದ ಅಳವಡಿಸಿಕೊಂಡ ಸ್ಕ್ರಿಪ್ಟ್‌ನಿಂದ ಓದುತ್ತಾರೆ (ಚಿತ್ರ 1ನ್ನು ನೋಡಿ).

ನಿರರ್ಗಳ ಮತ್ತು ಅಭಿವ್ಯಕ್ತಿಶೀಲವಾಗಿ ಓದುವ ಮೂಲಕ ಪ್ರೇಕ್ಷಕರಿಗೆ ಲವಲವಿಕೆಯಿಂದ ಪಠ್ಯವನ್ನು ಮಂಡಿಸುವ ನಿಟ್ಟಿನಲ್ಲಿ, ವಿದ್ಯಾರ್ಥಿಗಳು ಪ್ರದರ್ಶನ ನೀಡುವ ಮೊದಲು ಹಲವಾರು ಬಾರಿ ತಮ್ಮ ಭಾಗಗಳನ್ನು ಓದುವುದನ್ನು ಅಭ್ಯಾಸ ಮಾಡಬೇಕೆಂಬುದೇ ಏಕೈಕ ಅವಶ್ಯಕತೆ..

[1] ಮೂಲ: www.youtube.com/watch?v=9BIVO8uyLlQ
1




***ಚಿತ್ರ 1***. ಓದುಗರ ರಂಗಮಂದಿರದ ಅಧಿವೇಶನ ಪ್ರಗತಿಯಲ್ಲಿದೆ [1]

ಓದುಗರ ರಂಗಮಂದಿರ ಯಾವ ರೀತಿ ಸಹಾಯ ಮಾಡುತ್ತದೆ?
ಮುಖಪತ್ರ ಚಿತ್ರದಲ್ಲಿ, ಶಿಕ್ಷಕರು ಮುಖ್ಯವಾಗಿ ಮಕ್ಕಳ ಓದುವ ನಿರರ್ಗಳತೆಯನ್ನು ಸುಧಾರಿಸಲು ಓದುಗರ ರಂಗಮಂದಿರವನ್ನು ಬಳಸಿದರು. ನಿರರ್ಗಳವಾಗಿ ಓದುವುದೆಂದರೆ ವೇಗವಾಗಿ ಓದುವುದಲ್ಲ. ಪಠ್ಯದ ಅರ್ಥವನ್ನು ಪ್ರತಿಬಿಂಬಿಸಲು ಸೂಕ್ತವಾದ ವೇಗ ಮತ್ತು ಅಭಿವ್ಯಕ್ತಿಯೊಂದಿಗೆ ಸರಿಯಾಗಿ ಓದುವ ಸಾಮರ್ಥ್ಯ. ಅದೇ ಪಠ್ಯಗಳನ್ನು ಹಲವಾರು ಬಾರಿ ಓದುವುದು ಓದುವ ನಿರರ್ಗಳತೆಯನ್ನು ಬೆಳೆಸುವ ಅತ್ಯುತ್ತಮ ಮಾರ್ಗವಾಗಿದೆ. ಆದಾಗ್ಯೂ, ಮಕ್ಕಳು ಇದನ್ನು ಮಾಡಲು ಪ್ರೇರಿತರಾಗುವುದಿಲ್ಲ. ಓದುಗರ ರಂಗಭೂಮಿಯಲ್ಲಿ, ಪ್ರೇಕ್ಷಕರಿಗಾಗಿ ನೀಡುವ ಪ್ರದರ್ಶನವು, ವಿದ್ಯಾರ್ಥಿಗಳಿಗೆ ಪಠ್ಯಗಳನ್ನು ಪುನಃ ಓದಲು ಮತ್ತು ನಿರರ್ಗಳತೆಯನ್ನು ಅಭ್ಯಾಸ ಮಾಡಲು ಪ್ರಬಲ ಕಾರಣವನ್ನು ನೀಡುತ್ತದೆ (ಯಂಗ್ & ರಾಸಿನ್ಸ್ಕಿ, 2009). ಇದಲ್ಲದೆ, ಸ್ಕ್ರಿಪ್ಟ್‌ಗಳನ್ನು ಸಾಮಾನ್ಯವಾಗಿ ವಿದ್ಯಾರ್ಥಿಗಳ ನೆಚ್ಚಿನ ಪುಸ್ತಕಗಳಿಂದ ಅಳವಡಿಸಿಕೊಳ್ಳುವುದರಿಂದ, ಅವರಿಗೆ ಪ್ರಕ್ರಿಯೆಯು ಹೆಚ್ಚು ರೋಮಾಂಚನಕಾರಿಯೆನಿಸುತ್ತದೆ.

ವಿದ್ಯಾರ್ಥಿಗಳಿಗೆ ಓದುಗರ ರಂಗಮಂದಿರವು ಸುಧಾರಿತ ನಿರರ್ಗಳತೆಯ ಜೊತೆಗೆ, ಹಲವಾರು ಇತರೆ ಪ್ರಮುಖ ವಿಧಾನಗಳಲ್ಲಿಯೂ ಪ್ರಯೋಜನವನ್ನು ನೀಡುತ್ತದೆ! ಪ್ರದರ್ಶನಕ್ಕಾಗಿ ತಯಾರಿ ನಡೆಸುವಾಗ, ವಿದ್ಯಾರ್ಥಿಗಳು ಕಥೆ, ಅದರ ಸಂದರ್ಭ, ಕಥಾವಸ್ತು ಹೇಗೆ ವಿಕಾಸಗೊಳ್ಳುತ್ತದೆ ಇತ್ಯಾದಿಗಳ ಬಗ್ಗೆ ಯೋಚಿಸುತ್ತಾರೆ. ಮುಖಪತ್ರ ಚಿತ್ರದಲ್ಲಿ ಸೂಚಿಸಿದಂತೆ, ಪಾತ್ರಗಳನ್ನು ಕುರಿತ ಚರ್ಚೆಗಳು ವಿದ್ಯಾರ್ಥಿಗಳಿಗೆ ಪ್ರೇರಣೆ ಮತ್ತು ಚರಿತ್ರ ಚಿತ್ರಣದಂತಹ ಸಾಹಿತ್ಯಿಕ ಅಂಶಗಳನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತವೆ. ಹೀಗೆ, ವಿದ್ಯಾರ್ಥಿಗಳು ಅರ್ಥಕ್ಕೆ ಹೆಚ್ಚಿನ ಒತ್ತು ನೀಡಿ ಪಠ್ಯದೊಂದಿಗೆ ಗಾಢವಾಗಿ ತೊಡಗುತ್ತಾರೆ. ಇವೆಲ್ಲವೂ ಗಮನಾರ್ಹವಾಗಿ ಪಠ್ಯದ ಗ್ರಹಿಕೆಗೆ ನೆರವಾಗುತ್ತವೆ.

ಓದುಗರ ರಂಗಭೂಮಿಯು ವಿದ್ಯಾರ್ಥಿಗಳ ಆಲಿಸುವ-ಮಾತನಾಡುವ-ಓದುವ-ಬರೆಯುವ [2] ಕೌಶಲ್ಯಗಳನ್ನು ಸಹ ಸಂಯೋಜಿಸಬಹುದು, ಇದು ಆರಂಭಿಕ ವರ್ಷಗಳಲ್ಲಿನ ಸಾಕ್ಷರತೆಯ ಪ್ರಮುಖ ಗುರಿಯಾಗಿದೆ (ಕಾರ್ನ್‌ವೆಲ್, 2019). ನಾವು ಬರವಣಿಗೆಯ ಭಾಗಕ್ಕೆ ನಂತರ ಹೋಗೋಣ, ಆದರೆ ಓದುಗರ ರಂಗಭೂಮಿ ಇತರ ಮೂರು ಕೌಶಲ್ಯಗಳನ್ನು ಹೇಗೆ ಅರ್ಥಪೂರ್ಣವಾಗಿ ಒಟ್ಟುಗೂಡಿಸುತ್ತದೆ ಎಂಬುದನ್ನು ನೀವು ನೋಡಬಹುದು.

ಬಹುಶಃ, ಬಹಳ ಮುಖ್ಯವಾಗಿ, ವಿದ್ಯಾರ್ಥಿಗಳಿಗೆ ಓದುಗರ ರಂಗಭೂಮಿಯು ಓದುವುದಕ್ಕೆ ನಿಜವಾದ ಉದ್ದೇಶವನ್ನು ನೀಡುತ್ತದೆ ಮತ್ತು ಅವರು ಓದಿದ ಅಥವಾ ಆಲಿಸಿದ ಸಾಹಿತ್ಯವನ್ನು ಕುರಿತು ಪ್ರತಿಕ್ರಿಯಿಸುವ ಬಗ್ಗೆ ಆಲೋಚಿಸಲು ಯಥಾರ್ಥ ಸಂದರ್ಭವನ್ನು ಒದಗಿಸುತ್ತದೆ.

---

[2] ಇದನ್ನು ಕುರಿತ ಹೆಚ್ಚಿನ ಮಾಹಿತಿಗಾಗಿ, ELI Practitioner Brief Teaching Listening, Speaking, Reading and Writing: Sequential or Simultaneous? ಅನ್ನು ಪರಾಮರ್ಶಿಸಿ.

1

ಆದ್ದರಿಂದ ಓದುಗರ ರಂಗಭೂಮಿ, ಭಾಷೆ ಮತ್ತು ಸಾಕ್ಷರತೆಯ ಕಲಿಕೆಯ ಒಂದು ಪ್ರಮುಖ ಸಾಧನವಾಗಿದೆ. ಈ ಪ್ರಕಟಣೆಯಲ್ಲಿ, ಓದುಗರ ರಂಗಮಂದಿರವನ್ನು ತರಗತಿಯಲ್ಲಿ ಬಳಸುವ ಪ್ರಮುಖ ಹಂತಗಳು ಮತ್ತು ಸಲಹೆಗಳನ್ನು ನಾವು ಪಟ್ಟಿ ಮಾಡುತ್ತೇವೆ.

1

## ತರಗತಿಯಲ್ಲಿ ಓದುಗರ ರಂಗಮಂದಿರವನ್ನು ಬಳಸುವುದು

1. ಸೂಕ್ತ ಸಾಹಿತ್ಯವನ್ನು ಆರಿಸಿ. ಓದುಗರ ರಂಗಮಂದಿರವನ್ನು ಅನೇಕ ರೀತಿಯ ಸಾಹಿತ್ಯದೊಂದಿಗೆ ಯೋಜಿಸಬಹುದು: ಚಿತ್ರ ಪುಸ್ತಕಗಳು, ಸಣ್ಣ ಕಥೆಗಳು, ಸರಣಿ ಪುಸ್ತಕಗಳು, ಜಾನಪದ ಕಥೆಗಳು, ಕಾಲ್ಪನಿಕವಲ್ಲದ ಪುಸ್ತಕಗಳು ಹೀಗೆ. ನಿಮ್ಮ ವಿದ್ಯಾರ್ಥಿಗಳು ಇಷ್ಟಪಡುವ ಪುಸ್ತಕಗಳಿಂದ ಆಸಕ್ತಿದಾಯಕ ವಿಷಯ ಅಥವಾ ಅನೇಕ ಪಾತ್ರಗಳನ್ನು ಮತ್ತು ಸಾಕಷ್ಟು ಸಂಭಾಷಣೆಗಳನ್ನು ಹೊಂದಿರುವ ಸಮ್ಮೋಹಕ ಮತ್ತು ಉತ್ತಮ ಗತಿಕ್ರಮದ (pace) ಕಥಾಹಂದರವನ್ನುಳ್ಳ ಪುಸ್ತಕವನ್ನು ಆರಿಸಿ (ಅಥವಾ ವಿಷಯವು (ಕಂಟೆಂಟ್) ಸಂವಾದಗಳನ್ನು ಬರೆಯಲು ಅನುವು ಮಾಡಿಕೊಡುವ ರೀತಿ ಇರಬೇಕು). ನೀವು ಇದಕ್ಕಾಗಿ ಸಂಪೂರ್ಣ ಪುಸ್ತಕವನ್ನು ಬಳಸಬೇಕಾಗಿಲ್ಲ, ಆಸಕ್ತಿದಾಯಕ ಭಾಗಗಳನ್ನು ಮತ್ತು ವಿನಿಮಯವನ್ನು ಆಯ್ಕೆ ಮಾಡಬಹುದಾಗಿದೆ. ಮುಖಪತ್ರ ಚಿತ್ರದಲ್ಲಿ, ಶಿಕ್ಷಕರು *ಗೀತ್ ಕಾ ಕಮಲ್* ಅನ್ನು ಆಯ್ಕೆ ಮಾಡಿಕೊಂಡರು, ಏಕೆಂದರೆ ಗಟ್ಟಿ ಧ್ವನಿಯಲ್ಲಿ ಓದಿದಾಗ (ರೀಡ್ ಅಲೌಡ್) ಅವರ ವಿದ್ಯಾರ್ಥಿಗಳು ಅದನ್ನು ಬಹಳವಾಗಿ ಆನಂದಿಸಿದ್ದರು. ಇದು ಹಾಸ್ಯಮಯ ಜಾನಪದ ಕಥೆಯಾಗಿದ್ದು, ಆಸಕ್ತಿದಾಯಕ ಪಾತ್ರಗಳು, ಮತ್ತು ಹಾಸ್ಯಮಯ ಸಂಭಾಷಣೆಗಳನ್ನು, ಕೆಲವು ಪುನರಾವರ್ತಿತ ಆಶುಗಾಯನ ಮಾದರಿಗಳನ್ನು ಹೊಂದಿದೆ.

ಓದುಗರ ರಂಗಭೂಮಿಗೆ ಪುಸ್ತಕಗಳನ್ನು ಆಯ್ಕೆಮಾಡುವಾಗ, ನಿಮ್ಮ ವಿದ್ಯಾರ್ಥಿಗಳ ಓದುವ ಮಟ್ಟಕ್ಕೆ ಸುಮಾರಾಗಿ ಹೊಂದಿಕೆಯಾಗುವ ಪಠ್ಯಗಳನ್ನು ಪರಿಗಣಿಸಿ. ಅಭ್ಯಾಸ ಮಾಡಿದಲ್ಲಿ, ಅವರು ಅದನ್ನು ಗಟ್ಟಿ ಧ್ವನಿಯಲ್ಲಿ ಓದಲು ಸಾಧ್ಯವಾಗತಕ್ಕದ್ದಾಯ.

2. ಪುಸ್ತಕವನ್ನು ಆಧರಿಸಿ ಸ್ಕ್ರಿಪ್ಟ್ ಬರೆಯಿರಿ. ನಿರರ್ಗಳತೆಗೆ ಸಂಬಂಧಿಸಿದ ಉಪಯುಕ್ತ ಹೆಬ್ಬೆರಳಿನ ನಿಯಮವೆಂದರೆ (ಥಂಬ್ ರೂಲ್), ಮಕ್ಕಳು ಸುಮಾರು 90% ನಿಖರತೆಯೊಂದಿಗೆ ಓದಬಹುದಾದ ಪಠ್ಯಗಳನ್ನು ನೀಡುವುದು. ಆದ್ದರಿಂದ ಆಯ್ದ ಪಠ್ಯವು ನಿಮ್ಮ ಗುಂಪಿಗೆ ಸ್ವಲ್ಪ ಕಷ್ಟಕರವೆಂದು ನೀವು ಭಾವಿಸಿದರೆ, ಅದನ್ನು ಸರಳಗೊಳಿಸಿ, ಮತ್ತು ಹೊಂದಿಸಿ: ಅದು ನಿಮ್ಮ ವಿದ್ಯಾರ್ಥಿಗಳಿಗೆ ಸ್ವಲ್ಪ ಮಟ್ಟಿಗೆ ಸವಾಲೆನಿಸಿದಾಗ್ಯೂ, ಅಭ್ಯಾಸ ಮಾಡಿದರೆ ಕಲಿಯುವಂತಿರಬೇಕು.

ಸ್ಕ್ರಿಪ್ಟ್ ಬರೆಯುವಾಗ, ನೀವು ಕಥೆ ಅಥವಾ ಉದ್ಧೃತ ಭಾಗಗಳನ್ನು ದೃಶ್ಯಗಳಾಗಿ ವಿಂಗಡಿಸಬಹುದು. ಪಾತ್ರಗಳ ಜೊತೆಗೆ, ನಾಟಕದಲ್ಲಿ ಅಗತ್ಯವಾದ ಹಿನ್ನೆಲೆ ಮಾಹಿತಿ ಮತ್ತು ವಿವರಣೆಯನ್ನು ಒದಗಿಸುವ *ನಿರೂಪಕನನ್ನು* ಸೇರಿಸಿ. ನೀವು ಪಠ್ಯವನ್ನು ಸಂಭಾಷಣೆಗೆ ಹೊಂದಿಸಿಕೊಳ್ಳುತ್ತಿದ್ದರೆ, ಸ್ವಲ್ಪ ನಾಟಕೀಯತೆ ಅಥವಾ ಹಾಸ್ಯವನ್ನು ಸೇರಿಸಿ, ಆದಷ್ಟು ಸಹಜವಾಗಿ ಮತ್ತು ಆಸಕ್ತಿದಾಯಕವಾಗಿ ರೂಪಿಸಿ. ಕಿರಿಯ ವಿದ್ಯಾರ್ಥಿಗಳಿಗೆ ಸ್ಕ್ರಿಪ್ಟ್, ಹೆಚ್ಚು ಉದ್ದವಾಗವಾಗಬಾರದು. ಇಂಗ್ಲಿಷ್ ಆನ್‌ಲೈನ್‌ನಲ್ಲಿ ನೀವು ಅನೇಕ ಓದುಗರ ರಂಗಭೂಮಿಯ ಸ್ಕ್ರಿಪ್ಟ್‌ಗಳನ್ನು ಕಾಣಬಹುದು[3]. ಆದರೆ ನಿಮ್ಮ ಗುಂಪಿನಲ್ಲಿ ಜನಪ್ರಿಯವಾಗಿರುವ ಪುಸ್ತಕಗಳನ್ನು ಬಳಸಿಕೊಂಡು ನಿಮ್ಮದೇ ಆದ ಸ್ಕ್ರಿಪ್ಟ್‌ಗಳನ್ನು ರಚಿಸಬಹುದು.

3. ನಿಮ್ಮ ವಿದ್ಯಾರ್ಥಿಗಳಿಗಾಗಿ ಸ್ಕ್ರಿಪ್ಟ್‌ನ ಛಾಯಾಪ್ರತಿಗಳನ್ನು ಮಾಡಿ. ತಾತ್ತ್ವಿಕವಾಗಿ, ಪ್ರತಿ ಮಗುವಿಗೆ ಪ್ರತ್ಯೇಕ ಪ್ರತಿ ಸಿಗುವಂತಾಗುತ್ತದೆ.

---

[3] ಓದುಗರ ರಂಗಭೂಮಿಯ ಸ್ಕ್ರಿಪ್ಟ್‌ಗಳನ್ನು ವಿವಿಧ ವೆಬ್‌ಸೈಟ್‌ಗಳಿಂದ ಪ್ರಕಟಿಸುವ ಕೆಲವು ವೆಬ್‌ಸೈಟ್‌ಗಳ ಸಂಪರ್ಕಗಳು (links):

http://www.thebestclass.org/rtscripts.html
http://www.aaronshep.com/rt/RTE.html
http://www.teachingheart.net/readerstheater.htm
1

4. ನಿಮ್ಮ ಮೊದಲ ಚರ್ಚಾಕೂಟದಲ್ಲಿ, ಓದುಗರ ರಂಗಮಂದಿರದಲ್ಲಿ ಏನಾಗುತ್ತದೆ ಎಂಬುದನ್ನು ಮಕ್ಕಳಿಗೆ ವಿವರಿಸಿ. ಪ್ರೇಕ್ಷಕರು ಯಾರೆಂದು ಅವರಿಗೆ ತಿಳಿಸಿ, ಇದರಿಂದ ತಯಾರಿಕೆಗೊಂದು ಅರ್ಥವಿರುತ್ತದೆ. ಅವರ ಸಹಪಾಠಿಗಳು, ಶಿಕ್ಷಕರು, ಪೋಷಕರು ಮತ್ತು ಸಮುದಾಯದ ಸದಸ್ಯರು ಪ್ರೇಕ್ಷಕರಾಗಬಹುದು. ಅಥವಾ ಅವರು ಶಾಲೆಯ ಬೆಳಗಿನ ಅಸೆಂಬ್ಲಿ ಸಮಯದಲ್ಲಿ ನಾಟಕವನ್ನು ಪ್ರದರ್ಶಿಸಬಹುದು. ಅವರು ಸಾಲುಗಳನ್ನು ಕಂಠಪಾಠ ಮಾಡುವ ಅಗತ್ಯವಿಲ್ಲವಾದರೂ, ಅವುಗಳ ಭಾಗಗಳನ್ನು ಚೆನ್ನಾಗಿ ಅಭ್ಯಾಸ ಮಾಡಬೇಕು, ನಿರರ್ಗಳ ಮತ್ತು ಅರ್ಥಪೂರ್ಣ ಓದುವಿಕೆಯಿಂದ ಪ್ರೇಕ್ಷಕರು ನಾಟಕವನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುತ್ತದೆ.

5. ಅವರ ಓದುವ ಸಾಮರ್ಥ್ಯವನ್ನು ಗಮನದಲ್ಲಿರಿಸಿಕೊಂಡು ಗುಂಪಿನಲ್ಲಿರುವ ಪ್ರತಿ ಮಗುವಿಗೆ ಒಂದೊಂದು ಭಾಗ ನಿಗದಿಪಡಿಸಿ. -ಹೆಚ್ಚಿನ ಓದುವಿಕೆಯು ಅವಶ್ಯವಿರುವ ಕಡೆ-ಹೆಚ್ಚು ಪ್ರವೀಣ ಓದುಗರಿಗೆ ವಿಚಾರಪೂರ್ಣ ಪಾತ್ರಗಳನ್ನು ನಿಗದಿಸಿ. ಉದಾಹರಣೆಗೆ, ಮುಖಪತ್ರ ಚಿತ್ರದಲ್ಲಿ, *ಗೀತ್ ಕಾ ಕಮಲ್‌ನಲ್ಲಿನ* ಭಾರೀ-ಪರ್ಯವನ್ನುಳ್ಳ ನಿರೂಪಕ ಪಾತ್ರಗಳನ್ನು ಶಿಕ್ಷಕರು ಚೆನ್ನಾಗಿ ಓದಬಲ್ಲ ಇಬ್ಬರು ಹಿರಿಯ ಹುಡುಗಿಯರಿಗೆ ನಿಯೋಜಿಸಿದರು.

6. ನಿರರ್ಗಳ ಮತ್ತು ಅಭಿವ್ಯಕ್ತಿಶೀಲ ಓದುವಿಕೆಯ ಮಾದರಿ. ಸ್ಕ್ರಿಪ್ಟ್‌ನೊಂದಿಗೆ ವಿದ್ಯಾರ್ಥಿಗಳನ್ನು ಪರಿಚಯಿಸಲು, ಮೊದಲು, ಪರಿಣಾಮಕಾರಿ ಓದುವಿಕೆಯನ್ನು ನಿರೂಪಿಸುತ್ತಾ, ಮಕ್ಕಳು ತಮ್ಮ ಪ್ರತಿಗಳಲ್ಲಿ ಅದನ್ನು ಅನುಸರಿಸುತ್ತಿದ್ದಂತೆ, ಸ್ಕ್ರಿಪ್ಟ್ ಅನ್ನು ಒಂದೆರಡು ಬಾರಿ ಗಟ್ಟಿ ಧ್ವನಿಯಲ್ಲಿ ಓದಬೇಕು (ಚಿತ್ರ 2ನ್ನು ನೋಡಿ).

ಈ ಮಾದರಿಯನ್ನು ಪರಿಚಯಾತ್ಮಕ ಹಂತಕ್ಕೆ ಸೀಮಿತಗೊಳಿಸಬಾರದು. ಒಮ್ಮೆ ವಿದ್ಯಾರ್ಥಿಗಳಿಗೆ ಪಠ್ಯಕ್ಕೆ ಪರಿಚಯವಾಗಲು ಅವಕಾಶ ದೊರೆತ ನಂತರ ಅವರು ತಮಗೆ ದೊರೆತ ಭಾಗಗಳನ್ನು ಓದುವುದನ್ನು ಅಭ್ಯಾಸ ಮಾಡುವಾಗ, ಹಿಮ್ಮಾಹಿತಿಯನ್ನು ನೀಡಿ, ಸುಧಾರಿಸಲು ಅವರು ಏನು ಮಾಡಬಹುದೆಂಬುದನ್ನು ನಿರೂಪಿಸಿ.



***ಚಿತ್ರ 2***. ಸ್ಕ್ರಿಪ್ಟ್‌ನ ವಿವಿಧ ಭಾಗಗಳ ಓದಿನ ನಿರೂಪಣೆಯಲ್ಲಿ ತೊಡಗಿರುವ ಶಿಕ್ಷಕರು ಹಾಗೂ ಅದನ್ನು ಅ ಅನುಸರಿಸುತ್ತಿರುವ ಮಕ್ಕಳು.

ಚಿತ್ರ ಕೃಪೆ: ಅಖಿಲಾ ಪೈಡಾ

7. ತಮಗೆ ಕೊಟ್ಟಿರುವ ಭಾಗಗಳನ್ನು ಓದುವ ಅಭ್ಯಾಸ ಮಾಡುವಂತೆ ವಿದ್ಯಾರ್ಥಿಗಳಿಗೆ ತಿಳಿಸಿ. ಸಹಾಯಕವೆನಿಸಿದಲ್ಲಿ, ಅವರು ತಮ್ಮ ಭಾಗಗಳನ್ನು ಚಿನ್ಹಾಂಕಿತ(highlight) ಅಥವಾ ರೇಖಾಂಕಿತಗೊಳಿಸಬಹುದು(underline).ಇಡೀ ಗುಂಪು ಒಟ್ಟಿಗೆ ಪೂರ್ವಾಭ್ಯಾಸ ಮಾಡುವ ಮೊದಲು ಅವರು ಒಂದೆರಡು ಬಾರಿ ಜೋಡಿಯಾಗಿ ಅಥವಾ ಸಣ್ಣ ಗುಂಪುಗಳಲ್ಲಿ ಅಭ್ಯಾಸ ಮಾಡಲಿ. ಇದನ್ನು ಹೆಚ್ಚು ಸಂವೇದನಾಶೀಲವಾಗಿ ನಿರ್ವಹಿಸಿದಲ್ಲಿ, ಹೆಚ್ಚು ಪ್ರವೀಣ ಓದುಗರು ಈ ಸಣ್ಣ ಗುಂಪುಗಳಲ್ಲಿನ ತಮ್ಮ ಗೆಳೆಯರಿಗೆ ಸಹಾಯ ಮಾಡಬಹುದು. ಈ ಪೂರ್ವಸಿದ್ಧತಾ ಹಂತದ

1

ಮೂಲಕ ಪರಿಣಾಮಕಾರಿ ಓದಿನ ನಿರೂಪಣೆಯನ್ನು ಮುಂದುವರಿಸಿ. ಕಷ್ಟಕರವಾದ ಪದಗಳನ್ನು ವಿಸಂಕೇತಿಸಲು(decoding) ವಿದ್ಯಾರ್ಥಿಗಳಿಗೆ ಬೆಂಬಲ ನೀಡಿ. ಪಠ್ಯದ ಅರ್ಥ, ಕಥೆಯಲ್ಲಿನ ಪರಿಸ್ಥಿತಿ ಮತ್ತು ಅವರು ನಿರ್ವಹಿಸುತ್ತಿರುವ ಪಾತ್ರದ ಬಗ್ಗೆ ಗಮನಸೆಳೆಯುವ ಮೂಲಕ ಅಭಿವ್ಯಕ್ತಿ, ವೇಗ, ಪದವಿನ್ಯಾಸ ಮತ್ತು ಅವರ ಧ್ವನಿಯಲ್ಲಿ ಸೂಕ್ತವಾದ ಏರಿಳಿತಗಳನ್ನು ಸೇರಿಸಲು ನಿಧಾನವಾಗಿ ಪ್ರೋತ್ಸಾಹಿಸಿ. ವಿದ್ಯಾರ್ಥಿಗಳಿಗೆ ಅವರ ಸಲಹೆಗಳು ಮತ್ತು ವ್ಯಾಖ್ಯಾನಗಳನ್ನು ಹಂಚಿಕೊಳ್ಳಲು ಮತ್ತು ಚರ್ಚಿಸಲು ಅವಕಾಶವನ್ನು ಕಲ್ಪಿಸಿ.

ಅಭಿವ್ಯಕ್ತಿ ಮತ್ತು ಉಚ್ಚಾರಣೆಯ ವಿಧಾನವು ಅರ್ಥದ ಮೇಲೆ ಹೇಗೆ ಪರಿಣಾಮವನ್ನುಂಟುಮಾಡುತ್ತದೆ ಎಂಬುದರ ಕುರಿತು ವಿದ್ಯಾರ್ಥಿಗಳೊಂದಿಗೆ ಕಾರ್ಯಶೀಲರಾಗುವುದು ವಿನೋದಮಯವಾಗಿರಬಹುದು. ಉದಾಹರಣೆಗೆ, ಪ್ರತಿ ಬಾರಿಯೂ ಬೇರೆ ಬೇರೆ ಪದಕ್ಕೆ ಒತ್ತು ನೀಡುವ ಮೂಲಕ "ಅವನು ಕೇಕ್ ತಯಾರಿಸಿದನು" ಎಂಬ ಸಂಭಾಷಣೆಯನ್ನು ಹೇಳಿ, ಅದು ತಿಳಿಸುವ ಅರ್ಥದ ಬಗ್ಗೆ ಯೋಚಿಸುವಂತೆ ತಿಳಿಸಿ: "**ಅವನು** ಕೇಕ್ ತಯಾರಿಸಿದನು," "ಅವನು ಕೇಕ್ **ತಯಾರಿಸಿದನು**" ಅಥವಾ "ಅವನು **ಕೇಕ್** ತಯಾರಿಸಿದನು". ಅಂತೆಯೇ, ವಿರಾಮಚಿಹ್ನೆಯು ಸ್ವರ ಮತ್ತು ಅರ್ಥದ ಮೇಲೆ ಹೇಗೆ ಪರಿಣಾಮ ಬೀರುತ್ತದೆ ಎಂಬುದನ್ನು ಅನ್ವೇಷಿಸಲು ನೀವು ವಿದ್ಯಾರ್ಥಿಗಳಿಗೆ ಸಹಾಯ ಮಾಡಬಹುದು (ಉದಾ. *ಅವನು ಕೇಕ್ ತಯಾರಿಸಿದನು ಅವನು ಕೇಕ್ ತಯಾರಿಸಿದನು*! ಹಾಗೂ ಅವನು *ಕೇಕ್ ತಯಾರಿಸಿದನಾ*?).

ಅಗತ್ಯವಿರುವ ಮಕ್ಕಳಿಗೆ ಹೆಚ್ಚುವರಿಯಾಗಿ ವೈಯಕ್ತಿಕ ಅಭ್ಯಾಸವನ್ನು ಒದಗಿಸಿ. ನಿಮ್ಮ ವಿದ್ಯಾರ್ಥಿಗಳು ಬಯಸಿದರೆ ನೀವು ಹೆಚ್ಚುವರಿ ಅಭ್ಯಾಸದ ಅವಧಿಗಳಲ್ಲಿ ತೊಡಗಬಹುದು. ಮನೆಯಲ್ಲಿಯೂ ಸಹ ಅಭ್ಯಾಸ ಮಾಡಲು ಅವರನ್ನು ಪ್ರೋತ್ಸಾಹಿಸಿ.

8. ವಿದ್ಯಾರ್ಥಿಗಳು ಸಿದ್ಧರಾದಾಗ, ಅವರು ಆರಾಮವಾಗಿ ಮತ್ತು ನಿರರ್ಗಳವಾಗಿ ಓದುತ್ತಿದ್ದಲ್ಲಿ, ತರಗತಿಯ ಮುಂದೆ ಅಥವಾ ಉದ್ದೇಶಿತ ಪ್ರೇಕ್ಷಕರ ಮುಂದೆ ಪ್ರದರ್ಶನ ನೀಡಲು ಅವರನ್ನು ಆಹ್ವಾನಿಸಿ. ಪ್ರದರ್ಶನಕ್ಕಾಗಿ, ಮಕ್ಕಳು ತಮ್ಮ ಪಾತ್ರದ ಹೆಸರುಗಳು ಅಥವಾ ಚಿತ್ರಗಳೊಂದಿಗೆ ಲೇಬಲ್‌ಗಳನ್ನು ಮಾಡಬಹುದು (ಚಿತ್ರ 3ನ್ನು ನೋಡಿ). ಇವುಗಳನ್ನು ಬಳಸುವುದರಿಂದ ಪ್ರೇಕ್ಷಕರು ಅವರನ್ನು ಅನುಸರಿಸಲು ಸಹಾಯವಾಗುತ್ತದೆ. ಜೊತೆಗೆ, ಮಕ್ಕಳು ಪ್ರದರ್ಶನದ ತಯಾರಿಯ ಅಭ್ಯಾಸದ ಸುತ್ತುಗಳ ನಡುವೆ ಇವುಗಳನ್ನು ಮಾಡುವುದನ್ನು ಆನಂದಿಸುತ್ತಾರೆ.



***ಚಿತ್ರ 3.*** ಒದುಗರ ರಂಗಮಂದಿರ[4]ದಲ್ಲಿ ತಾವು ಮಾಡುತ್ತಿರುವ ಪಾತ್ರಗಳ ಹೆಸರು ಮತ್ತು ಚಿತ್ರವನ್ನೊಳಗೊಂಡ ಲೇಬಲ್‌ಗಳನ್ನು ಬಳಸುತ್ತಿರುವ ವಿದ್ಯಾರ್ಥಿಗಳು

[4] ಮೂಲ: www.strategiesforspecialinterventions.weebly.com
1

ಓದುಗರ ರಂಗಮಂದಿರವನ್ನು ದೊಡ್ಡ ತರಗತಿಗಳಿಗೆ ಅಳವಡಿಸಿಕೊಳ್ಳುವುದುದೊಡ್ಡ ತರಗತಿಯಲ್ಲಿ ಈ ಪ್ರಕ್ರಿಯೆಯನ್ನು ಅಳವಡಿಸಲು ಹಿಂಜರಿಯಬೇಡಿ. ಅನೇಕ ಗುಂಪುಗಳು ಒಂದೇ ನಾಟಕವನ್ನು ಪ್ರದರ್ಶಿಸಬಹುದು ಅಥವಾ ಪ್ರತಿ ಗುಂಪು ಸುದೀರ್ಘ ನಾಟಕದ ವಿಭಿನ್ನ ದೃಶ್ಯಗಳನ್ನು ಪ್ರದರ್ಶಿಸಬಹುದು. ಪ್ರತಿ ಗುಂಪಿನ ಅಭ್ಯಾಸಕ್ಕಾಗಿ ನೀವು ವಿಭಿನ್ನ ದಿನಗಳನ್ನು ನಿಯೋಜಿಸಬಹುದು. ಒಂದು ಗುಂಪು ಗಟ್ಟಿ ಧ್ವನಿಯಲ್ಲಿ ಪೂರ್ವಾಭ್ಯಾಸ ಮಾಡಿದಾಗ, ಉಳಿದ ವಿದ್ಯಾರ್ಥಿಗಳು ತಮ್ಮ ಸ್ಕ್ರಿಪ್ಟ್‌ನ ಪ್ರತಿಗಳಲ್ಲಿ ಅದನ್ನು ಅನುಸರಿಸಬಹುದು. ಅವರ ಸಹಪಾಠಿಗಳ ಕಾರ್ಯಕ್ಷಮತೆಯ ಬಗ್ಗೆ ಹಿಮ್ಮಾಹಿತಿಯನ್ನು ಮತ್ತು, ಸಂವಾದಗಳನ್ನು ಹೇಗೆ ಓದಬೇಕು ಎಂಬುದರ ಕುರಿತು ಸಲಹೆಗಳನ್ನು ಕೇಳುವ ಮೂಲಕ ಅವರನ್ನು ತೊಡಗಿಸಿಕೊಳ್ಳಬಹುದು.

ಮುಖ್ಯವಾಗಿ ಈ ಚಟುವಟಿಕೆಯು ವಿದ್ಯಾರ್ಥಿಗಳಿಗೆ ಆಕರ್ಷಕ ಮತ್ತು ಉದ್ದೇಶಪೂರ್ವಕವಾಗಿರಬೇಕು. ನಿಮ್ಮ ತರಗತಿಯಲ್ಲಿ ಇದನ್ನು ಪ್ರಯತ್ನಿಸಿ. ಖಂಡಿತವಾಗಿಯೂ ವಿದ್ಯಾರ್ಥಿಗಳು ಇದನ್ನು ಇಷ್ಟಪಡುತ್ತಾರಲ್ಲದೆ, ಇನ್ನೂ ಹೆಚ್ಚಿನ ಓದುಗರ ರಂಗಮಂದಿರದ ಚರ್ಚಾಕೂಟಗಳನ್ನು ಕೇಳುತ್ತಾರೆ!

ಪರಾಮರ್ಶನಗಳು:

Cornwell, L. (2019). What is readers theatre? [Blog piece]. Retrieved from: http://www.scholastic.com/librarians/programs/whatisrt.htm

Young, C. & Rasinski, T. (2009). Implementing readers theatre as an approach to classroom fluency instruction. The Reading Teacher, 63(1), 4-13.



1